ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ನಿವೃತ್ತಿ, ಪಿಂಚಣಿಗೆ ಅರ್ಹ ಸೇವೆ ಪರಿಗಣಿಸುವುದು

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) :-

1271 (1553) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ನಿರುದ್ಯೋಗಿ ಪದವೀಧರರನ್ನು ಸ್ಟೈಫೆಂಡರಿ ಮೂಲಕ ವಿವಿಧ ಇಲಾಖೆಗಳಲ್ಲಿ 1978 ರಲ್ಲಿ ನೇಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) 1988 ರಲ್ಲಿ ಸ್ಟೈಫೆಂಡರಿ ಪದವೀಧರರಿಗೆ 50% ಮೀಸಲಾತಿ ಕೊಡುವುದಕ್ಕೆ ತೀರ್ಮಾನಿಸಿ ಇಲಾಖೆಗೆ ನೇಮಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಸ್ಟೈಫೆಂಡರಿ ಪದÀವೀಧರರು ಸುಮಾರು 12-13 ವರ್ಷಗಳು ಮಿತ ವೇತನ ಪದವೀಧರರಾಗಿ ಸೇವೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ವಿವರ ನೀಡುವುದು)

(ಈ) ಸ್ಟೈಫೆಂಡರಿ ಪದÀವೀಧರರು ಹಾಗೂ ದಿನಗೂಲಿ ನೌಕರರ ಅರ್ಹ ಸೇವೆಯನ್ನು ನಿವೃತ್ತಿ ಪಿಂಚಣಿಗೆ ಪರಿಗಣಿಸುವ ಸಂಬಂಧ ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ದಿನಾಂಕ: 02.09.2019ರಲ್ಲಿ ತೀರ್ಪು ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?